# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್:114

6ನೇ ವರ್ಷ 18ನೇ ಸಂಚಿಕೆ ಕೊಪ್ಪ 27-12-1987 ಭಾನುವಾರ ಬೆಲೆ 50ಪೈಸೆ


ಜಯಪುರದ ಸುತ್ತ ಮುತ್ತ ದನಗಳಿಗೆ

## ಹುಲಿ ಮತ್ತು ಮನುಷ್ಯರ ಹಾವಳಿ!

(ವರದಿ: ಕೃಷ್ಣ ಭಂಡಾರಿ)

**ಜಯಪುರ: ಇಲ್ಲಿನ ಸುತ್ತಮುತ್ತಲ ಹಳ್ಳಿಗಳಲ್ಲಿ ಮನುಷ್ಯರು ಮತ್ತು ಹುಲಿಗಳ ಹಾವಳಿಯಿಂದ ದನಕರುಗಳು ತೀವ್ರ ಸಂಕಷ್ಟಕ್ಕೆ ಗುರಿಯಾಗಿವೆ.**

ಕಳ್ಳತನದಿಂದ ದನಗಳನ್ನು ಕಡಿದು ಮಾರುತ್ತಿದ್ದವರಿನ್ನಲಾದ ಕರ್ಕಿಕೊಂಡ ಎಸ್ಟೇಟಿನ ರಾಮಸ್ವಾಮಿ ಮತ್ತು ಸಮ್ಮ ದ್ದೀನ್ ಎಂಬವರನ್ನು ಜಯಪುರದ [illegible] ಯುವಕರು ಈಚೆಗೆ ದನದ ಮಾಂಸದ ಸಮೇತ ಹಿಡಿದು, ಪೋಲೀಸರಿಗೆ ಒಪ್ಪಿಸಿದ್ದಾರೆ.

ಇವರುಗಳು ಜಯಪುರ–ಬಾಳೆಹೊನ್ನೂರುಗಳ ಕೆಲವು ಮಾಂಸದ ಹೋಟೆಲುಗಳಿಗೆ ಮಾಂಸ ಪೂರೈಸುತ್ತಿದ್ದುದನ್ನು ಒಪ್ಪಿಕೊಂಡಿದ್ದು, ಈ ಬಗ್ಗೆ ಪೋಲೀಸರು ಸ್ಥಳೀಯ ಹೋಟೆಲ್ ಮಾಲೀಕರಿಗೆ ಎಚ್ಚರಿಕೆ ನೀಡಿದ್ದಾರೆ.

### ಹುಲಿಗಳು

ಇನ್ನೊಂದು ಕಡೆಯಿಂದ ಕಾಡು ಬೋಳಾಗಿ ಹುಲಿಗಳು ನಾಡಿಗೇ ನುಗ್ಗಲು ಪ್ರಾರಂಭಿಸಿರುವ ವರದಿಗಳು ಬರುತ್ತಿವೆ.

ಈಚೆಗೆ ಇಲ್ಲಿಗೆ ಸಮೀಪದ ಕೂಳೂರಿನ ಸುಬ್ಬ ಎಂಬ ಕೃಷಿ ಕಾರ್ಮಿಕರ ಮನೆಯ ಕೊಟ್ಟಿಗೆಯಿಂದಲೇ ಗಬ್ಬದ ಹಸುವೊಂದನ್ನು ಅನಾಮತ್ ಹೊತ್ತುಕೊಂಡೇ ಹೋಗಿರುವ ಹುಲಿ ಭಾರೀ ಗಾತ್ರದ್ದೆನ್ನಲಾಗಿದ್ದು, ರೈತರು ಭಯಭೀತರಾಗಿದ್ದಾರೆ.

ಇದಕ್ಕೆ ಕೆಲ ದಿನ ಮುಂಚೆ ಕಟ್ಟೆಮನೆಯ ಬಾಬು ಎಂಬ ಕೃಷಿ ಕಾರ್ಮಿಕರ ಒಂದು ದನವನ್ನು ಮನೆಯಿಂದ ಕೇವಲ 1 ಫರ್ಲಾಂಗ್ ದೂರದಲ್ಲಿ ಹುಲಿ ಹಿಡಿದಿತ್ತು. ಅಗಳಗಂಡಿಯಲ್ಲೂ 1 ದನ ಹುಲಿಗೆ ಆಹಾರವಾಗಿತ್ತು. ಅಲಗೇಶ್ವರದಲ್ಲಿ ಕಾಣೆಯಾದ ತಮ್ಮ ಎತ್ತನ್ನು ಹುಡುಕುತ್ತ ಹೋದ ಅದರ ಮಾಲೀಕರು, ಅದನ್ನು ಹುಲಿ ಹರಿದು ಬಗೆದು ತಿನ್ನುತ್ತಿರುವ ದೃಶ್ಯ ಕಂಡು ಹೆದರಿ ಕೆಲವು ದಿನ ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡಿದ್ದರು.

ಪುರಸಭೆಗೆ ವಂಚಿಸಿ ನಿವೇಶನ ನುಂಗಲು ಯತ್ನಿಸಿದ ವ್ಯಕ್ತಿಯ ಮೇಲೆ

# ವಂಚನೆ ದಾವೆ ಹೂಡುವ ನಿರ್ಣಯ

**ಕೊಪ್ಪ : ಇಲ್ಲಿನ ಪುರಸಭೆ ವ್ಯಾಪ್ತಿಯಲ್ಲಿನ ವಾರಸುದಾರರಿಲ್ಲದ ನಿವೇಶನವೊಂದನ್ನು ಖೋಟಾ ಭೋಗ್ಯ ಪತ್ರದ ಮೂಲಕ ತಮ್ಮದಾಗಿಸಿಕೊಳ್ಳಲು ಯತ್ನಿಸಿದ್ದಕ್ಕಾಗಿ ಶ್ರೀಮತಿ ನಜೀರ್‌ಬಾನು ಎಂಬವರ ಮೇಲೆ ಪುರಸಭೆ ಕ್ರಿಮಿನಲ್ ಮೊಕದ್ದಮೆ ಹೂಡಲು ಹಾಗೂ ಸದರಿ ನಿವೇಶನವನ್ನು ಮುಟ್ಟುಗೋಲು ಹಾಕಿಕೊಳ್ಳಲು ನಿರ್ಧರಿಸಿದೆ.**

ಸುಭಾಷ್ ರಸ್ತೆಯಲ್ಲಿ ಅಣ್ಣಪ್ಪ ಬಿನ್ ಸಿದ್ದಣ್ಣ ಎಂಬವರ ಹೆಸರಿನಲ್ಲಿದ್ದ ಅ. ನಂ. 485/51–52ರ ನಿವೇಶನವನ್ನು ಕೊಪ್ಪ ವಾಸಿ ಆರಿಫ್ ಸಾಹೇಬ್ ಇವರ ತಾಯಿ ಶ್ರೀಮತಿ ನಜೀರ್ ಬಾನುರವರ ಹೆಸರಿಗೆ 2–12–86ರ ಕೌನ್ಸಿಲ್ ನಿರ್ಣಯದ ಮೂಲಕ ಖಾತೆ ಬದಲಾವಣೆ ಮಾಡಲಾಗಿದೆ. ಇವರ ಪತಿ ದಿ! ಇಬ್ರಾಹಿಂ ಸಾಹೇಬ್ ಎಂಬವರಿಗೆ ಸದರಿ ಅಣ್ಣಪ್ಪ ಈ ನಿವೇಶನವನ್ನು ಭೋಗ್ಯ ಮಾಡಿಕೊಟ್ಟಂತೆ ಭೋಗ್ಯ ಪತ್ರವೊಂದನ್ನು ರೂ. 1–50ರ ಛಾಪಾ ಕಾಗದದ ಮೇಲೆ ಬರೆಸಿ, ಪುರಸಭೆಗೆ ಸಲ್ಲಿಸಲಾಗಿದೆ.

ಈ ಪತ್ರದ ಮೇಲೆ ಕೊಪ್ಪ ಸಬ್ ರಿಜಿಸ್ಟ್ರಾರ್ ಕಛೇರಿಯ ಸೀಲು ಇದ್ದು ಸಹಿ ಇಲ್ಲ; ಈ ನಿವೇಶನದ ಎನ್‌ಕಂಬರೆನ್ಸ್ ಸರ್ಟಿಫಿಕೇಟ್ ಪ್ರಕಾರವೂ ಅದು ರಿಜಿಸ್ಟರ್ ಆಗಿಲ್ಲ ಎಂದು ಗೊತ್ತಾಗಿದೆ

ಈ ಸೈಟಿನ ಹಿಂಭಾಗದಲ್ಲಿರುವ ಸ್ವಲ್ಪ ಜಾಗವನ್ನು ತಮಗೆ ಮಂಜೂರು ಮಾಡಿಸಿ ಕೊಡುವಂತೆ ಆರಿಫ್ ಮತ್ತು ಜಾಫರ್ ಪುರಸಭಾ ಸದಸ್ಯ ಶ್ರೀನಿವಾಸ ಶೆಟ್ಟಿಯವರನ್ನು ಕೇಳಿದಾಗ ಅವರು ಸಂಶಯಗೊಂಡು ದಾಖಲೆಗಳನ್ನೆಲ್ಲ ತೆಗೆಸಿ ಪರಿಶೀಲಿಸಿದಾಗ ಇನ್ನೊಂದು ವಂಚನೆಯ ಪ್ರಕರಣವೆಂಬುದು ಬಯಲಾಯಿತೆಂದೂ, ಕಾನೂನು ಸಲಹೆ ಪಡೆಯಲಾಗಿ ಸದರಿಯವರಿಗೆ ಈ ನಿವೇಶನದ ಮೇಲೆ ಹಕ್ಕಿಲ್ಲವೆಂಬುದು ದೃಢಪಟ್ಟಿತೆಂದೂ ಗೊತ್ತಾಗಿದೆ.

ಈ ಬಗ್ಗೆ ಡಿ. 23ರಂದು ಕೌನ್ಸಿಲ್‌ನ ತುರ್ತು ಸಭೆ ಚರ್ಚಿಸಿ, ತೆಗೆದುಕೊಂಡ ತೀರ್ಮಾನಕ್ಕೆ 9 ಜನ ಸದಸ್ಯರು ಬೆಂಬಲಿಸಿದರು; ಇಕ್ಬಾಲ್ ಮತ್ತು ಶ್ರೀಮತಿ ಗೋಪಿ ತಟಸ್ಥರಾಗಿ ಉಳಿದರು; ಶೀನ ಭಂಡಾರಿ ಅದನ್ನು ಪುರಸಭಾ ನಿಯಮಾವಳಿಯ ತಾಂತ್ರಿಕ ಅಂಶಗಳ ಸಹಾಯದಿಂದ ವಿರೋಧಿಸಿ 'ಡಿಸ್ಸೆಂಟ್ ನೋಟ್' ದಾಖಲಿಸಿದರು ಎಂದು ಆ ಸಭೆಯ ದಾಖಲೆಗಳಿಂದ ತಿಳಿದು ಬರುತ್ತದೆ.

ಈ ಖಾತೆ ಬದಲಾವಣೆ ನಿರ್ಣಯ ಹಿಂದಿನ ಮುಖ್ಯಾಧಿಕಾರಿ ಗುಂಡೂರಾವ್ ಕಾಲದಲ್ಲಿ ಆಗಿದ್ದು, **ಊರನ್ನು ಕಬಳಿಸುವ ಈ ಕಾಯಕದಲ್ಲಿ** ಇನ್ನೂ ಯಾರ್ಯಾರು ಶಾಮೀಲಾಗಿದ್ದಾರೆಂಬುದು ಹೊರಗೆ ಬರುವುದನ್ನೇ ಜನ ಆಸಕ್ತಿಯಿಂದ ಎದುರು ನೋಡುತ್ತಿದ್ದಾರೆ.

ಶೃಂಗೇರಿ ಬಳಿ ಕ. ವಿ. ಮಂ. ಲಾರಿ ಝರಿಗೆ ಉರುಳಿ

## ಅಪಘಾತ, ಒಬ್ಬ ಕಾರ್ಮಿಕನ ಮರಣ

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಈ ತಾಲ್ಲೂಕಿನ ಹಾದಿಕೆಸಗೋಡು ಸಮೀಪದ ಮಾತೊಳ್ಳಿ ಎಂಬಲ್ಲಿ ಕ. ವಿ ಮಂಡಳಿ ಲಾರಿಯೊಂದು ಸುಮಾರು 25–30 ಅಡಿ ಆಳದ ಝರಿಯೊಂದಕ್ಕೆ ಉರುಳಿದಾಗ ಅದರ ಅಡಿಗೆ ಸಿಕ್ಕಿ ತೀವ್ರವಾಗಿ ಗಾಯಗೊಂಡ ಎಸ್. ಜಿ. ರಂಗಣ್ಣ (35)ಎಂಬ ಕಾರ್ಮಿಕ ಆಸ್ಪತ್ರೆಗೆ ಸಾಗಿಸುವಾಗ ಮೃತಪಟ್ಟ ದುರಂತ ಡಿ. 24 ರಂದು ನಡೆದಿದೆ.

ಬಾಳೆಹೊನ್ನೂರು ಉಪ ವಿಭಾಗಕ್ಕೆ ಸೇರಿದ ಈ ಲಾರಿ ಈ ಕುಗ್ರಾಮಕ್ಕೆ ಗ್ರಾಮಾಂತರ ವಿದ್ಯುದೀಕರಣ ಯೋಜನೆಗಾಗಿ ಸರಂಜಾಮು ಸಾಗಿಸುತ್ತಿದ್ದು, ಹೊಸದಾದ ಈ ರಸ್ತೆಯ ಅತ್ಯಂತ ಕಡಿದಾದ ತಿರುವಿನಲ್ಲಿ ಚಾಲಕನ ಹತೋಟಿ ತಪ್ಪಿ ತಲೆಕೆಳಗಾಗಿ ಉರುಳಿ ಹೋಯಿತು. ಅದರಲ್ಲಿದ್ದ 6 ಮಂದಿಯಲ್ಲಿ ಉಳಿದವರು ಅಲ್ಪ ಸ್ವಲ್ಪ ಗಾಯಗಳೊಂದಿಗೆ ಪಾರಾಗಿದ್ದಾರೆ. ಲಾರಿ ಚಾಲಕ ಚಿಕ್ಕಣ್ಣ 23 ವರ್ಷಗಳ ಸುದೀರ್ಘ ಅನುಭವವುಳ್ಳವರು.

ಹಾಸನದವರಾದ ರಂಗಣ್ಣ 6 ತಿಂಗಳ ಹಿಂದಷ್ಟೇ ಇಲಾಖೆಯಲ್ಲಿ ಖಾಯಂ ಆಗಿದ್ದರು. ಪತ್ನಿ ಮತ್ತು 3 ತಿಂಗಳ ಗಂಡು ಮಗುವೂ ಸೇರಿದಂತೆ 3 ಪುಟ್ಟ ಮಕ್ಕಳನ್ನು ಅವರು ಅಗಲಿದ್ದಾರೆ. ಅವರ ಕುಟುಂಬಕ್ಕೆ ಲೈನ್‌ಮನ್ ಸಂಘದಿಂದ 5000 ರೂ. ಮತ್ತು ಇಲಾಖೆಯಿಂದ 10 ಸಾವಿರ ರೂ. ಪರಿಹಾರ ದೊರೆಯುವುದಾಗಿ ಅಧಿಕಾರಿಗಳು ತಿಳಿಸಿದ್ದಾರೆ.

ಶೃಂಗೇರಿಯ ಸಬ್ ಇನ್ಸ್‌ಪೆಕ್ಟರ್ ಪಾಪಯ್ಯ ಮುಂದಿನ ತನಿಖೆ ಕೈಗೊಂಡಿದ್ದಾರೆ. ಎಸ್ಪಿ ಮತ್ತು ಸರ್ಕಲ್ ಇನ್ಸ್‌ಪೆಕ್ಟರ್ ಸ್ಥಳಕ್ಕೆ ಭೇಟಿ ಕೊಟ್ಟಿದ್ದರು.

ಕುವೆಂಪು ವಿ.ವಿ. ಆಶ್ರಯದ ಪ್ರಪ್ರಥಮ ಕ್ರೀಡಾಕೂಟದಲ್ಲಿ

## ಕೊಪ್ಪ ಪ್ರ. ದ. ಕಾಲೇಜಿಗೆ ಖೊಖೊ ಪ್ರಶಸ್ತಿ

ಕೊಪ್ಪ: ಡಿ.24 ಮತ್ತು 25ರಂದು ಇಲ್ಲಿನ ಪ್ರಥಮ ದರ್ಜೆ ಕಾಲೇಜಿನ ಆಶ್ರಯದಲ್ಲಿ ನಡೆದ ಕುವೆಂಪು ವಿಶ್ವವಿದ್ಯಾನಿಲಯದ ಆಶ್ರಯದ ಪ್ರಪ್ರಥಮ ಮಲೆನಾಡು ವಲಯ ಕ್ರೀಡಾಕೂಟದಲ್ಲಿ ಆಥಿತೇಯ ತಂಡ ಪುರುಷರ ಖೊಖೊ ಪ್ರಶಸ್ತಿ ಗೆದ್ದುಕೊಂಡಿತು. ಶೃಂಗೇರಿ ಕಾಲೇಜು ತಂಡ 2ನೇ ಸ್ಥಾನ ಪಡೆಯಿತು.

ವಾಲಿಬಾಲ್ ಪ್ರಶಸ್ತಿ ಬೀರೂರಿನ ಪಿಜಿಎಂ ಕಾಲೇಜಿನ ತಂಡದ ಪಾಲಾಯಿತು. ಚಿಕ್ಕಮಗಳೂರಿನ ಐಡಿಎಸ್‌ಜಿ ಕಾಲೇಜು ದ್ವಿತೀಯ ಸ್ಥಾನ ಪಡೆಯಿತು.

ಡಿ. 25ರಂದು ಕಾಲೇಜು ಸಮಿತಿ ಅಧ್ಯಕ್ಷ ಎಂ. ಡಿ. ಬಾಲಕೃಷ್ಣ ಅವರು ಸ್ಪರ್ಧಿಗಳಿಗೆ ಪ್ರಶಸ್ತಿ ಪತ್ರಗಳನ್ನೂ, ಗೆದ್ದ ತಂಡಗಳಿಗೆ ಪರ್ಯಾಯ ಫಲಕಗಳನ್ನೂ ವಿತರಿಸಿದರು. ಪ್ರಿನ್ಸಿಪಾಲ್ ಪ್ರೊ! ಕೆ.ವಿ. ಲಿಂಗಪ್ಪ ಅತಿಥಿಗಳನ್ನು ಸ್ವಾಗತಿಸಿದರು. ಉಪನ್ಯಾಸಕ ಪ್ರಕಾಶ್ ವಂದಿಸಿದರು.

## ಸಂಕ್ಷಿಪ್ತ ಸುದ್ದಿಗಳು

### ನ. ರಾ. ಪುರ ತಾ|| ಯುವ ಮೇಳ

ನ. ರಾ. ಪುರ ತಾಲ್ಲೂಕಿನ ಯುವ ಜನ ಮೇಳ ಡಿ. 30 ಮತ್ತು 31 ರಂದು ಮುತ್ತಿನಕೊಪ್ಪದಲ್ಲಿ ನಡೆಯಲಿದೆ. ಸುಮಾರು 500 ಜನ ಸ್ಪರ್ಧಿಗಳು ಭಾಗವಹಿಸುವ ನಿರೀಕ್ಷೆಯಿದೆಯೆಂದು ತಾ|| ಯು|| ಒಕ್ಕೂಟದ ಅಧ್ಯಕ್ಷ ಡಿ. ಕೆ. ಭಾಸ್ಕರ್ ತಿಳಿಸಿದ್ದಾರೆ.

### ತಮ್ಮೇನಾಯ್ಕ್ ನಿಧನ

ಕೊಪ್ಪದ ಲೋಕೋಪಯೋಗಿ ಇಲಾಖಾ ಕಂಟ್ರಾಕ್ಟರರೂ, ಎಳೆಮಡಿಯ ಕಾಯಿಯಂಥ ಜನಪ್ರಿಯ ವ್ಯಕ್ತಿಗಳೂ ಆಗಿದ್ದ ತಮ್ಮೇನಾಯ್ಕರು (ಲಕ್ಕೊಳ್ಳಿ ಮಂಜಪ್ಪ ನಾಯ್ಕ್) ಡಿ. 24ರಂದು ಬೆಳಗ್ಗೆ ಹೃದಯಾಘಾತದಿಂದ ನಿಧನರಾದರು. ಅವರಿಗೆ 62 ವರ್ಷ ವಯಸ್ಸಾಗಿತ್ತು.

### ಎಂ. ಜಿ ಆರ್. ನಿಧನಕ್ಕೆ ಸಂತಾಪ

ತಮಿಳುನಾಡು ಮುಖ್ಯಮಂತ್ರಿ ಎಂ. ಜಿ. ರಾಮಚಂದ್ರನ್‌ರವರ ನಿಧನಕ್ಕೆ ಸಂತಾಪ ಸೂಚಿಸಿ ನ. ರಾ. ಪುರ ಪುರಸಭೆಯಲ್ಲಿ ನಡೆದ ಶೋಕ ಸಭೆಯಲ್ಲಿ, ಮೃತರಿಗೆ ಶ್ರದ್ಧಾಂಜಲಿ ಅರ್ಪಿಸುವ ನಿರ್ಣಯ ಕೈಗೊಂಡು ಅವರ ಕುಟುಂಬಕ್ಕೆ ಕಳಿಸಿಕೊಡಲಾಯಿತು.

### ಸಸಿ ಬೇಕಿರುವವರು ವಿವರ ತಿಳಿಸಲು ಕೋರಿಕೆ

ಕೊಪ್ಪ: 1988ರ ಮಳೆಗಾಲದಲ್ಲಿ [illegible] ಲು ಸಸಿಗಳು ಬೇಕಿರುವ ಸಾಮಾಜಿಕ [illegible] ಸಸಿಗಳ ಜಾತಿವಾರು ಮತ್ತು [illegible] ವಾರು ಅವಶ್ಯಕತೆಯನ್ನು ತಾ|| 10.1.88 [illegible] ಕೊಪ್ಪ ವಲಯ [illegible] ಅವರಿಗೆ ಕಛೇರಿಗೆ ತಿಳಿಸಲು [illegible] ಗಿದೆ.

# ರೈತ ಸಂಘ ನೇತೃತ್ವದ ‘ಕನ್ನಡ ದೇಶ’ ಉದಯ: ಕೃಷಿ ರಂಗಕ್ಕೆ ನ್ಯಾಯ ದೊರಕಿಸುವ ಪ್ರತಿಜ್ಞೆ

**‘ಕರ್ನಾಟಕದ ರಾಜಕಾರಣಕ್ಕೆ ಹೊಸ ಜನಪರ ತಿರುವೊಂದನ್ನು ನೀಡುವ’ ಮಹತ್ತರ ಉದ್ದೇಶದೊಂದಿಗೆ ಹೊಸ ಪ್ರಾದೇಶಿಕ ಪಕ್ಷ ‘ಕನ್ನಡ ದೇಶ’ದ ಸ್ಥಾಪನೆಯನ್ನು ಹುಬ್ಬಳ್ಳಿಯಲ್ಲಿ ಡಿ. 21ರಂದು ಕರ್ನಾಟಕದ ಮೂಲೆ ಮೂಲೆಗಳಿಂದ ಬಂದಿದ್ದ ಒಂದೂವರೆ ಲಕ್ಷಕ್ಕೂ ಮಿಕ್ಕಿದ ರೈತರ, ಬರಹಗಾರರ, ಕಲಾವಿದರ ಬೃಹತ್ ಸಮಾವೇಶದಲ್ಲಿ ಘೋಷಿಸಲಾಯಿತು.**

ಸುಮಾರು 2 ಸಾವಿರಕ್ಕೂ ಹೆಚ್ಚು ವಿವಿಧ ಬಗೆಯ ವಾಹನಗಳಲ್ಲಿ ಬಂದಿದ್ದ ಒಂದೂವರೆ ಲಕ್ಷಕ್ಕೂ ಮಿಕ್ಕಿದ ಹೊಸ ಪಕ್ಷದ ಕಾರ್ಯಕರ್ತರು ಈ ಘೋಷಣೆಗೆ ಬೆಂಬಲವಾಗಿ ಕಿವಿ ಗಡಚಿಕ್ಕುವ ಜಯಘೋಷ ಹಾಗೂ ಕರತಾಡನ ಮಾಡಿದರು.

ಈ ಹೊಸ ಪಕ್ಷದ ಅಧ್ಯಕ್ಷರಾಗಿ ರಾಜ್ಯ ರೈತ ಸಂಘದ-ನಾಯಕರಾದ ಪ್ರೊ|| ಎಂ.ಡಿ. ನಂಜುಂಡಸ್ವಾಮಿ, ಕಾರ್ಯದರ್ಶಿಯಾಗಿ ಎನ್. ಡಿ. ಸುಂದರೇಶ್ ಆಯ್ಕೆಯಾದರು. ಪಕ್ಷದ ಪ್ರಣಾಳಿಕೆಯ ಬಗ್ಗೆ ಈ ಇಬ್ಬರು ನಾಯಕರೂ ವಿವರಿಸಿದರು. “ಈ ಪಕ್ಷ ರಾಜ್ಯ ರೈತ ಸಂಘದ ರಾಜಕೀಯ ಆಯುಧ” ಎಂದು ನಂಜುಂಡ ಸ್ವಾಮಿ ಘೋಷಿಸಿದರು.

ಕೃಷಿ ಮತ್ತು ಕೈಗಾರಿಕೆ ಉತ್ಪನ್ನಗಳ ಬೆಲೆ ನಿಗದಿಯಲ್ಲಿನ ತಾರತಮ್ಯ ನಿವಾರಣೆ, ಇದಕ್ಕಾಗಿ ‘ಬೆಲೆ ಮತ್ತು ವೆಚ್ಚ ಆಯೋಗ’ದ ರಚನೆ, ರೈತರ ಎಲ್ಲಾ ಸಾಲಗಳ ಮನ್ನಾ. ನೀರು ಮತ್ತು ಭೂ ತೆರಿಗೆಗಳ ಸಂಪೂರ್ಣ ರದ್ದತಿ. ಭೂರಹಿತ ಕೃಷಿ ಕಾರ್ಮಿಕರಿಗೂ ಕಾರ್ಮಿಕ ಕಾನೂನು ಅನ್ವಯಿಸುವಿಕೆ, ಕೃಷಿ ಉತ್ಪಾದನೆಗಳ ಸಾಗಣೆ ನಿರ್ಬಂಧ ರದ್ದತಿ— ಇವೇ ಮುಂತಾದುವು ಹೊಸ ಪಕ್ಷದ ಪ್ರಣಾಳಿಕೆಯಲ್ಲಿನ ಕೆಲವು ಪ್ರಮುಖ ಅಂಶಗಳು.

ಹೊಸ ಪಕ್ಷದ ಧ್ವಜ ಹಳದಿ ಮತ್ತು ಕೆಂಪು ಬಣ್ಣಗಳ ನಡುವೆ ಕರ್ನಾಟಕ ಭೂಪಟದ ಹಸಿರು ಚಿತ್ರವನ್ನು ಒಳಗೊಂಡಿದೆ. ಹೊಸ ಪಕ್ಷದೊಳಗೆ ಕರ್ನಾಟಕ ರಾಜ್ಯ ರೈತ ಸಂಘದ ನೇತೃತ್ವದಲ್ಲಿ ಕಲಾವಿದರ ಮತ್ತು ಲೇಖಕರ ಬಳಗ ಮತ್ತು ‘ಹಿಂದಿ ಸಾಮ್ರಾಜ್ಯ ಶಾಹಿ ವಿರೋಧಿ ಸಂಘ’ ಇವು ಸೇರಿವೆ. ಇದಲ್ಲದೆ ರಾಜ್‌ಕುಮಾರ್ ಅಭಿಮಾನಿ ಸಂಘ ಮತ್ತು ದಲಿತ ಸಂಘರ್ಷ ಸಮಿತಿಯೂ ಈ ಪಕ್ಷಕ್ಕೆ ಬೆಂಬಲ–ಸಹಾನುಭೂತಿ ವ್ಯಕ್ತಪಡಿಸಿರುವುದಾಗಿ ವರದಿಯಾಗಿದೆ.

ಹೊಸ ಪಕ್ಷದ ಉದ್ಘಾಟನೆಗೆ ಶುಭ ಕೋರಿ ಕುವೆಂಪು, ಡಾ|| ಸಿದ್ಧಯ್ಯ ಪುರಾಣಿಕ, ಡಾ|| ಜಿ. ಎಸ್. ಶಿವರುದ್ರಪ್ಪ ಮುಂತಾದವರು ಸಂದೇಶ ಕಳಿಸಿ, ‘ಈ ನಾಡಿನ ವಿಚಾರವಂತರು, ಬುದ್ಧಿ ಜೀವಿಗಳು ಎಲ್ಲರೂ ಒಗ್ಗೂಡಿ ಪ್ರಬಲವಾದ ರಾಜಕೀಯ ಪಕ್ಷವೊಂದನ್ನು ಕಟ್ಟುವ ಅನಿವಾರ್ಯತೆ ಬಹಳವಾಗಿದೆ.... ಶತ ಶತಮಾನಗಳಿಂದ ಶೋಷಕರು ಹೆಣೆದಿರುವ ಮೌಢ್ಯದ ಬಲೆಯಿಂದ ಬಿಡಿಸಿಕೊಂಡು ರೈತ- ದಲಿತ– ಭಾಷಾ ಹಿತಾಸಕ್ತಿಗಳನ್ನು ಕಾಪಾಡಿಕೊಂಡು ರಾಷ್ಟ್ರದ ಸಮಗ್ರತೆಯ ಚೌಕಟ್ಟಿನೊಳಗೆ ಪ್ರಗತಿಯತ್ತ ಮುಂದುವರಿಯಬೇಕಿದೆ.....” ಎಂದಿದ್ದಾರೆ. ●

## ದಿ|| ಸುಬ್ಬಣ್ಣನಾಯರ್ ಸ್ಮಾರಕ ಕ್ರೀಡಾ ಕೂಟ

**ಹರಿಹರಪುರದಲ್ಲಿ ಪ್ರತಿವರ್ಷ ನಡೆಯುವ ಶೃಂಗೇರಿ, ಕೊಪ್ಪ, ನ.ರಾ ಪುರ ತಾ|| ಮಟ್ಟದ ಪುರುಷರ ಕಬಡ್ಡಿ, ಮಹಿಳೆಯರ ಖೊ ಖೊ ಮತ್ತು ಟೆನಿಕಾಯ್ಟ್ ಕ್ರೀಡಾಕೂಟವನ್ನು 1988ರ ಜನವರಿ 16 ಮತ್ತು 17ರ ಶನಿವಾರ ಮತ್ತು ಭಾನುವಾರ ಅ. ರಾ. ಸ. ಕಿರಿಯ ಕಾಲೇಜಿನ ಕ್ರೀಡಾಂಗಣದಲ್ಲಿ ಏರ್ಪಡಿಸಲಾಗುವುದು.**

**ಹೆಚ್ಚಿನ ವಿವರಗಳಿಗೆ ಸಚ್ಚಿದಾನಂದ, C/o ಸ್ವಾಮಿ ಟ್ರಾವೆಲ್ಸ್, ಹೆಗ್ಗಾರು, ಕೊಪ್ಪ ತಾ|| ಅಥವಾ ಮೋಹನ ಗೌಡ, ದೈಹಿಕ ಶಿಕ್ಷಕರು, ಕುದುರೆಗುಂಡಿ– ಇವರನ್ನು ಸಂಪರ್ಕಿಸಬಹುದು. ವ್ಯವಸ್ಥಾಪಕರು : ವಿ. ಎಂ. ಶಿವಮೂರ್ತಿ, ದೈ. ಶಿ. ಶಿಕ್ಷಕರು, ಹರಿಹರಪುರ.**

## ಕಾಲೇಜು ವಿದ್ಯಾರ್ಥಿನಿಯರಿಗೆ ಪ್ರಬಂಧ ಸ್ಪರ್ಧೆ

**ಮಹಿಳೆಯರ ಸ್ಥಾನ ಮಾನ, ಸಮಸ್ಯೆ, ಶೋಷಣೆ ಬಗ್ಗೆ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿನಿಯರಲ್ಲಿ ಜಾಗೃತಿ, ಅರಿವು, ಆಸಕ್ತಿ ಮೂಡಿಸುವ ಸಲುವಾಗಿ ಅವರಿಗೆ ಪ್ರಬಂಧ ಸ್ಪರ್ಧೆಯೊಂದನ್ನು ಗುಡಿಬಂಡೆಯ ಮಹಿಳಾ ಅಧ್ಯಯನ ವೇದಿಕೆಯ ಆಶ್ರಯದಲ್ಲಿ ಏರ್ಪಡಿಸಲಾಗಿದೆ**

ನಿಯಮಗಳು :

ಪಿ.ಯು.ಸಿ. ಮತ್ತು ಮೇಲ್ಪಟ್ಟ ತರಗತಿಗಳ ವಿದ್ಯಾರ್ಥಿನಿಯರೆಲ್ಲಾ ಸ್ಪರ್ಧೆಯಲ್ಲಿ ಭಾಗವಹಿಸಲು ಅರ್ಹರು. ಭಾಗವಹಿಸುವವರು ತಾವು ವ್ಯಾಸಂಗ ಮಾಡುತ್ತಿರುವ ಬಗ್ಗೆ ತಮ್ಮ ಸಂಸ್ಥೆಯ ಮುಖ್ಯಸ್ಥರಿಂದ ಪ್ರಮಾಣ ಪತ್ರ ಪಡೆದು ಪ್ರಬಂಧಕ್ಕೆ ಲಗತ್ತಿಸಿರಬೇಕು. ಪ್ರಬಂಧದ ಭಾಷೆ ಕನ್ನಡವಾಗಿದ್ದು, ಪ್ರಬಂಧ ಸ್ವತಂತ್ರವಾಗಿರಬೇಕು. ಆಧಾರ ಅಥವಾ ಅನುವಾದ ಆಗಿರಕೂಡದು. ಈ ಹಿಂದೆ ಪ್ರಕಟವಾಗಿರಬಾರದು. ಲೇಖನ ಪುಟದ ಒಂದೇ ಮಗ್ಗುಲಲ್ಲಿರಬೇಕು. ಫೂಲ್‌ಸ್ಕೇಪ್ 10ರಿಂದ 15 ಪುಟಗಳೊಳಗಿರಬಹುದು. ಕೊಟ್ಟಿರುವ ವಿಷಯಗಳಲ್ಲಿ ಯಾವುದಾದರೂ ಒಂದನ್ನು ಆರಿಸಿಕೊಂಡು ಬರೆಯಬಹುದು.

ವಿಷಯಗಳು :

**1) ಮಹಿಳೆಯ ಶೋಷಣೆಯಲ್ಲಿ ಧರ್ಮದ ಪಾತ್ರ. 2) ಮಹಿಳೆಯ ಮೇಲೆ ನಡೆಸಲಾಗುತ್ತಿರುವ ದಬ್ಬಾಳಿಕೆ, ದೌರ್ಜನ್ಯ, ಅತ್ಯಾಚಾರ. 3) ಮಹಿಳೆಗೆ ಬೇಕಾಗಿರುವ ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆ.**

(3ನೇ ಪುಟಕ್ಕೆ)

## ತಾರಾದೇವಿಯ ಮಾದರಿ ಮದುವೆ

ಚಿಕ್ಕಮಗಳೂರು ಕ್ಷೇತ್ರದ ಲೋಕಸಭಾ ಸದಸ್ಯೆ ಡಿ. ಕೆ. ತಾರಾದೇವಿ ಹೈದರಾಬಾದಿನ ಸಿದ್ಧಾರ್ಥ ರೆಡ್ಡಿ ಎಂಬವರನ್ನು ಬೆಂಗಳೂರಿನಲ್ಲಿ ವಿವಾಹವಾಗಿದ್ದಾರೆ. **ಈ ಅಂತರ್ಜಾತಿ ವಿವಾಹ ಬಹುಪಾಲು ಸರಳ ರೀತಿಯಲ್ಲಿ,** ಸಂಪ್ರದಾಯಬದ್ಧವಾಗಿ ನೆರವೇರಿದೆ. ಮದುವೆಗೆ ಅವರು ಆಹ್ವಾನ ಪತ್ರಿಕೆಗಳನ್ನು ಸಹ ಅಚ್ಚು ಮಾಡದೆ, ಕೇವಲ ನೆಂಟರಿಷ್ಟರು ಮತ್ತು ಅತಿ ನಿಕಟ ಸ್ನೇಹಿತರನ್ನು ಮಾತ್ರ ಕರೆದಿದ್ದರೆನ್ನಲಾಗಿದೆ. (ಪುರೋಹಿತರು ಕೂಡ ಬೇಡ ಎಂದು ಅವರ ಇಷ್ಟವಾಗಿತ್ತೆಂದೂ, ಆದರೆ ಪುರೋಹಿತರು ಬೇಕೇಬೇಕೆಂದು ವರನ ತಾಯಿ ಒತ್ತಾಯಿಸಿದ್ದರಿಂದ ಅವರು ಒಪ್ಪಬೇಕಾಯಿತೆಂದೂ ಅವರ ‘ಶಿಷ್ಯ’ನೊಬ್ಬ ಹೇಳಿದ್ದಾಗಿ ವರದಿಯಾಗಿದೆ.)

ಹೈದರಾಬಾದಿನ ‘ಪ್ರಿಯದರ್ಶಿನಿ ಪ್ರಿಂಟ್ ಅಂಡ್ ಅಡ್ವರ್ಟೈಸಿಂಗ್’ ಸಂಸ್ಥೆಯ ಮಾಲೀಕರಾದ ಕೈಗಾರಿಕಾ ಇಂಜಿನಿಯರ್ ಸಿದ್ಧಾರ್ಥ ರೆಡ್ಡಿ ರಾಜೀವ್ ಗಾಂಧಿಯವರ ನಿಕಟವರ್ತಿಗಳು, ಅಮೇಥಿಯಲ್ಲಿ ಅವರ ಚುನಾವಣಾ ಪ್ರಚಾರದಲ್ಲಿ ನೆರವಾಗಿದ್ದವರು ಎನ್ನಲಾಗಿದೆ.

ಈ ನೂತನ ದಂಪತಿಗಳಿಗೆ ಎಲ್ಲ ‘ಮುಂಜಾವು’ ಓದುಗರ ಹಾಗೂ ಎಲ್ಲ ಅಂತರ್ಜಾತಿ-ಸರಳ ವಿವಾಹ ಪ್ರಿಯರ ಶುಭಾಶಯಗಳು—ಎನ್ನೋಣವೆ?

ಪದ್ಯದಂಕಣ

## ಬಾರೋ ಹಸಿರಿನ ಹರಿಕಾರ

ಬಾರೋ ಹಸಿರಿನ ಹರಿಕಾರ
ನೀಡೋ ನಿನ್ನಯ ಸಹಕಾರ
ಹಸಿರಿಗೆ ಉಸಿರನು ತುಂಬಿಸಲು
ಮಾಡುವ ಬಾ ದೃಢ ನಿರ್ಧಾರ
ಬೆಳೆಸುತಲಿಹರು ನೀಲಗಿರಿ
ಒಣಗುತಲಿಹುದು ನೀರ ಝರಿ
ಮಾಯವು ಆಯಿತು ಗೋಮಾಳ
ರೈತಗೆ ಉಳಿವುದು ಬರಿ ಸಾಲ
ನಾವೇ ತಂದಿಹ ಸರಕಾರ, ಮಾಡುತಲಿಹುದು ಅಪಕಾರ
ಕಾಡಿನ ರಾಣಿ ಭಗವತಿಯ
ಕರಗಳ ಕಡಿವರು ಕೇಡಿಗಳು
ನೋಡಿಯು ನೋಡದ ಜನರೆಲ್ಲ
ಶಿಖಂಡಿಗಳು, ಬರಿ ಹೇಡಿಗಳು
ಕಾಡನು ಮಾಡಲು ಸಂಹಾರ, ಕಳ್ಳರಿಗುಂಟೆ ಅಧಿಕಾರ ?
ಕುದುರೆಮುಖದ ಕಾರ್ಖಾನೆ
ನುಂಗಿದೆ ನಾಡ ಖಜಾನೆಯನೆ
ಉಗುಳಿದೆ ಕಸ ಕಶ್ಮಲವನ್ನು
ಕೆಡಿಸಿದೆ ಭದ್ರೆಯ ಜಲವನ್ನು
ಹುಡುಕಲೆಬೇಕು ಪರಿಹಾರ, ಅಳಿಸಲೆ ಬೇಕು ಅನಾಚಾರ
ಮಾಡುವರಂತೆ ಅಣೆಕಟ್ಟೆ
ಬೆಳೆಸುತ ಶ್ರೀಮಂತರ ಹೊಟ್ಟೆ
ಬರದಿರೆ ಮಳೆಯು ಸಕಾಲದಲಿ
ಬಡವರಿಗೆಲ್ಲ ಅರೆಹೊಟ್ಟೆ
ಮಾಡುತಲಿಹರು ವ್ಯಭಿಚಾರ, ಆಗುವುದೆಂತು ಉದ್ಧಾರ ?
ಬಾರೋ ಹಸಿರಿನ ಹರಿಕಾರ
ನೀಡೋ ನಿನ್ನಯ ಸಹಕಾರ

**—ಬಾಲಕೃಷ್ಣ**

(ಸೂಚನೆ : ಈ ಹಾಡಿನ 2ನೇ ನುಡಿಯಲ್ಲಿ ‘ಭಗವತಿ’ ಎಂಬಲ್ಲಿ ಸ್ಥಳೀಯ ಕಾಡಿನ ಹೆಸರನ್ನೂ. 3ನೆಯ ನುಡಿಯಲ್ಲಿ ಕುದುರೆಮುಖ, ಭದ್ರೆ ಎಂಬಲ್ಲಿ ಸ್ಥಳೀಯ ಕಾರ್ಖಾನೆ, ನದಿಯ ಹೆಸರನ್ನೂ ಕಲ್ಪಿಸಿದಲ್ಲಿ ಜಿಲ್ಲೆಯ ಎಲ್ಲ ಊರುಗಳಿಗೂ ಈ ಹಾಡು ಅನ್ವಯವಾಗುತ್ತದೆ.)

## ಓದುಗರ ಪತ್ರಗಳು

# ಫುಟ್‌ಪಾತ್ ಮತ್ತು ಸಂಚಾರ ನಿಯಂತ್ರಣ : ಎರಡು ಸಲಹೆಗಳು

-1-

ಮಾನ್ಯರೆ,

ನಿಮ್ಮ 20.12.87ರ ಸಂಚಿಕೆಯಲ್ಲಿ ಪ್ರಕಟವಾಗಿರುವ ಓದುಗರ ಪತ್ರದಲ್ಲಿ ಕೊಪ್ಪ ರಸ್ತೆಯು ಕೆಲವೆಡೆ ಇಕ್ಕಟ್ಟಾಗಿದ್ದು ರಸ್ತೆಯ ಎರಡೂ ಕಡೆ ವಾಹನಗಳನ್ನು ದೀರ್ಘಕಾಲ ನಿಲ್ಲಿಸದಂತೆ ನಿಯಂತ್ರಿಸಬೇಕೆಂದು ಮನವಿ ಮಾಡಲಾಗಿದೆಯಷ್ಟೆ.

'ದೀರ್ಘಕಾಲ ನಿಲ್ಲಿಸದಂತೆ' ಎಂಬುದಕ್ಕಿಂತ ರಸ್ತೆಯ ಎರಡೂ ಕಡೆ ನಿಲ್ಲಿಸದೆ ಒಂದೇ ಕಡೆ ನಿಲ್ಲಿಸುವಂತೆ ನಿಯಂತ್ರಿಸುವುದು ಇನ್ನೂ ಉತ್ತಮ.

ಇದೇ ರೀತಿ ಹರಿಹರಪುರದಲ್ಲೂ ಶ್ರೀ ಗೋಪಾಲ ನಾಯ್ಕರ ಅಂಗಡಿ, ಪಂಚಾಯ್ತಿ ಕಚೇರಿ, ಶೃಂಗೇರಿ ರಸ್ತೆಯ ಜಂಕ್ಷನ್ ಮುಂತಾದ ಕಡೆಗಳಲ್ಲಿ ವಾಹನಗಳು ನಿಂತು ಬೇರೆ ವಾಹನಗಳಿಗೆ ಮತ್ತು ಪ್ರಯಾಣಿಕರಿಗೆ ಅಪಾಯ ಒಡ್ಡುವ ಸಂದರ್ಭಗಳು ಸರ್ವೇ ಸಾಮಾನ್ಯ. ಅಲ್ಲಿ ಕೂಡ ಮೇಲೆ ಹೇಳಿದಂತೆ ನಿಯಂತ್ರಣ ಅಥವಾ ನಿಷೇಧ ವಿಧಿಸುವುದು ಅಗತ್ಯ. ಬಹುಶಃ ಈ ರೀತಿ ಇಕ್ಕಟ್ಟಾದ ರಸ್ತೆಗಳಿರುವ ಎಲ್ಲ ಕಡೆಗಳಲ್ಲೂ ಅಲ್ಲಲ್ಲಿನ ಸಂಬಂಧಪಟ್ಟ ಅಧಿಕಾರಿಗಳು ಹೀಗೇ ಸೂಕ್ತ ಕ್ರಮ ತೆಗೆದುಕೊಳ್ಳುವುದು ಯೋಗ್ಯ.

ಎರಡನೆಯದಾಗಿ, ಕೊಪ್ಪ ಅಂಚೆ ಕಛೇರಿಯ ಎದುರುಗಡೆ ಕಾಂಕ್ರೀಟ್ ರಸ್ತೆಯ ಎರಡೂ ಪಕ್ಕ ಬಹಳ ತಗ್ಗಾಗಿದ್ದು, ಇಲ್ಲಿ ಓಡಾಡುವವರಿಗೆ, ವಾಹನಗಳಿಗೆ ಮತ್ತು ಇಲ್ಲಿ ಬಸ್‌ಗಳಿಂದ ಇಳಿಯುವ ಪ್ರಯಾಣಿಕರಿಗೆ ಬಹಳ ತೊಂದರೆಯಾಗುತ್ತಿದೆ. (ಒಂದು ಪ್ರಮುಖ ಸಾರ್ವಜನಿಕ ಸ್ಥಳವಾದ ಇಲ್ಲಿ ಇದು ನೋಡಲು ಕೂಡ ಅವಲಕ್ಷಣವಾಗಿ ಕಾಣುತ್ತಿದೆ.)

**ಈ ಬಗ್ಗೆ ಕೂಡ ಸಂಬಂಧಪಟ್ಟ ಇಲಾಖೆ**ಗಳವರು ಗಮನ ಹರಿಸಿ, ಅಗತ್ಯವಿದ್ದರೆ ಲಯನ್ಸ್, ರೋಟರಿಯಂಥ ಯಾವುದಾದರೂ ಸ್ಥಳೀಯ ಸೇವಾ ಸಂಸ್ಥೆಗಳ ಮೂಲಕ ಈ ಪ್ರದೇಶವನ್ನು ಅಚ್ಚುಕಟ್ಟುಗೊಳಿಸಿದರೆ ಸಾರ್ವಜನಿಕರಿಗೆ ಬಹಳ ಉಪಕಾರವಾಗುತ್ತದೆ.

**—ಬಿ. ಪಿ. ಭಟ್,**
**ಕೊಪ್ಪ**

-2-

ಮಾನ್ಯರೆ,

ನಿಮ್ಮ 20.12.87ರ ಪತ್ರಿಕೆಯಲ್ಲಿ ಕೊಪ್ಪ ಮುಖ್ಯ ರಸ್ತೆಯಲ್ಲಿ ಅರಳೀಕಟ್ಟೆಯಿಂದ ಬಸ್ ಸ್ಟ್ಯಾಂಡ್‌ವರೆಗಿನ ಇಕ್ಕಟ್ಟು ಜಾಗದಲ್ಲಿ ಪಾದಚಾರಿಗಳಿಗಾಗಿ 'ಫುಟ್‌ಪಾತ್' ವ್ಯವಸ್ಥೆಗೆ ಮಾಡಲಾಗಿರುವ ಬೇಡಿಕೆ ಸಮಂಜಸವಾಗಿದೆ ಆದರೆ ಇದನ್ನು ಕೂಡಲೇ ವ್ಯವಸ್ಥೆಗೊಳಿಸುವುದು ಪುರಸಭೆಯವರಿಗಾಗಲಿ, ಪೋಲೀಸ್ ಇಲಾಖೆಗಾಗಲೀ ಕಷ್ಟವಾಗಬಹುದು ಆದ್ದರಿಂದ ತಾತ್ಕಾಲಿಕವಾಗಿ ಇನ್ನೊಂದು ವ್ಯವಸ್ಥೆ ಮಾಡುವುದು ಪಾದಚಾರಿಗಳಿಗಾಗಲಿ, ವಾಹನ ಚಾಲಕರಿಗಾಗಲಿ ಸುಲಭವಾಗುತ್ತದೆ. ಪೋಲೀಸ್ ಇಲಾಖೆ ಈ ಕ್ರಮ ಕೈಗೊಳ್ಳಬಹುದಾಗಿದೆ.

ಅದೆಂದರೆ, ಅರಳೀಕಟ್ಟೆ ಕಡೆಯಿಂದ ಬಸ್ ಸ್ಟ್ಯಾಂಡ್‌ವರೆಗಿನ ರಸ್ತೆಯಲ್ಲಿ ವಾಹನಗಳನ್ನು ಒಂದು ದಿನ ರಸ್ತೆಯ ಎಡ ಪಕ್ಕದಲ್ಲಿಯೂ, ಒಂದು ದಿನ ಬಲಪಕ್ಕದಲ್ಲಿಯೂ ನಿಲ್ಲಿಸುವಂತೆ ವ್ಯವಸ್ಥೆ ಮಾಡಬೇಕು. ಈ ಬಗ್ಗೆ ತಿಳುವಳಿಕೆಗಾಗಿ ಫಲಕಗಳನ್ನು ಹಾಕಬೇಕು. ಉದಾ: 1,3,5,7, ಇತ್ಯಾದಿ ಬೆಸ ಸಂಖ್ಯೆಯ ತಾರೀಖುಗಳಂದು ಎಡ ಭಾಗದಲ್ಲಿ ನಿಲ್ಲಿಸುವುದಾದರೆ, 2,4,6,8, ಇಂತಹ ಸರಿ ಸಂಖ್ಯೆಯ ತಾರೀಖುಗಳಂದು ಬಲಭಾಗದಲ್ಲಿ ನಿಲ್ಲಿಸಬಹುದು. ಇದರಿಂದ ವಾಹನಗಳ ಸಂಚಾರಕ್ಕೂ, ಪಾದಚಾರಿಗಳಿಗೂ ಅನುಕೂಲವಾಗುವುದು.

'ಫುಟ್‌ಪಾತ್' ವ್ಯವಸ್ಥೆಯಂತೂ ನಿಜಕ್ಕೂ ಅತೀ ಅವಶ್ಯಕವಾಗಿದೆ ತಾತ್ಕಾಲಿಕವಾಗಿ ಈ ವ್ಯವಸ್ಥೆ ಮಾಡಿದಲ್ಲಿ ನಂತರ ಫುಟ್‌ಪಾತ್ ಮತ್ತು ಪಾರ್ಕಿಂಗ್‌ಗಳಿಗೆ ತನ್ನದೇ ಆದ ವ್ಯವಸ್ಥೆಯನ್ನು ಪುರಸಭೆ ಮತ್ತು ಪೋಲೀಸ್ ಇಲಾಖೆಗಳು ಮಾಡಬಹುದೆನಿಸುತ್ತದೆ.

ಸಂಬಂಧಪಟ್ಟವರು ಗಮನ ಹರಿಸುವರೆ?

**—ಹೊಸ್ಮನೆ ರಮೇಶ್,**
ಗಡಿಕಲ್

## 'ಸಂಪೂರ್ಣ ರಾಮಾಯಣ'
## ಬ್ಯಾಲೆ

ನರಸಿಂಹರಾಜಪುರ: ಈಚೆಗೆ ನಡೆದ ಇಲ್ಲಿನ ಕಿರಿಯ ಕಾಲೇಜಿನ ವಾರ್ಷಿಕೋತ್ಸವದಲ್ಲಿ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಂದ 'ಸಂಪೂರ್ಣ ರಾಮಾಯಣ' ಬ್ಯಾಲೆ ನಡೆಯಿತು. ಕೊಪ್ಪದ ಉಪಾಧ್ಯಾಯಿನಿ ಸರಸ್ವತಿಯವರ ನಿರ್ದೇಶನದಲ್ಲಿ ಈ ಕಾರ್ಯಕ್ರಮ ನಡೆಯಿತು. ರಾಮಚರಿತೆ ಕುರಿತಾದ ಹಿನ್ನೆಲೆ ಗಾಯನ ಹಾಗೂ ಲವ ಕುಶರ ಪಾತ್ರಸೊಗಸಾಗಿ ಮೂಡಿಬಂದಿತು.

ನ. ರಾ. ಪುರದ ಮಂಗಳ ಕಲಾ ಸಾಹಿತ್ಯ ವೇದಿಕೆ ಅಧ್ಯಕ್ಷರಾದ ಸತೀಶಾಚಾರ್ ಅವರ 'ಹೆಂಡತಿಯಲ್ಲ ಹೆಗ್ಗಡತಿ' ಎಂಬ ಮತ್ತೊಂದು ನಾಟಕವೂ ಪ್ರದರ್ಶಿಸಲ್ಪಟ್ಟಿತು. ಸತೀಶಾಚಾರ್ ನಿರ್ದೇಶಿಸಿದ ಈ ನಾಟಕದಲ್ಲಿ ಹೆಗ್ಗಡತಿ ಪಾತ್ರದಲ್ಲಿ ಕುಮಾರಿ ಶ್ರೀ ವಿದ್ಯಾ ಹಾಗೂ ಈಕೆಯ ಗಂಡ ಎಸ್. ಐ ಪಾತ್ರದಲ್ಲಿ ಇ. ಪಿ. ನೆಲ್ಸನ್ ಉತ್ತಮವಾಗಿ ಅಭಿನಯಿಸಿದರು.

'ಸಂಪೂರ್ಣ ರಾಮಾಯಣ'ದಂಥ ರೂಪಕ ಪ್ರದರ್ಶಿಸುವ ಸಾಹಸದ ಕಾರ್ಯಕ್ಕೆ ಕೈ ಹಾಕಿದುದು ಮೆಚ್ಚತಕ್ಕ ಅಂಶ.

**—ಎಸ್. ಎ. ಮಹಾಬಲ ರಾವ್.**
ನ. ರಾ. ಪುರ

## ಪ್ರಬಂಧ ಸ್ಪರ್ಧೆ

(2ನೇ ಪುಟದಿಂದ)

**ಬಹುಮಾನಗಳು** . ಮೊದಲ ಬಹುಮಾನ ರೂ. 150; ಎರಡನೇ ಬಹುಮಾನ ರೂ. 100; ಮೂರನೆಯ ಬಹುಮಾನ ರೂ. 75 ಮತ್ತು ಇತರೆ ಬಹುಮಾನಗಳು.

**ಲೇಖನಗಳನ್ನು ಕಳುಹಿಸಲು ಕೊನೇ ದಿನಾಂಕ 5-1-88. ಲೇಖನ ಕಳುಹಿಸಬೇಕಾದ ವಿಳಾಸ** : "ಮಹಿಳಾ ಅಧ್ಯಯನ ವೇದಿಕೆ", c/o ಶ್ರೀ ಕೆ. ನಾರಾಯಣಸ್ವಾಮಿ, ಪ್ರಿನ್ಸಿಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಗುಡಿಬಂಡೆ, ಕೋಲಾರ ಜಿಲ್ಲೆ.

# "ಬನ್ನೂರು ಪ್ರಕರಣ ರಾಜಕೀಯ ಸೇಡಿನದು ; ದಲಿತರ ಮೇಲಿನ ದೌರ್ಜನ್ಯವಲ್ಲ"

ಮಾನ್ಯರೆ,

ಬನ್ನೂರು ಗ್ರಾಮದ ಸ. ನಂ. 14ರಲ್ಲಿ ದಲಿತರ ಮೇಲೆ ಅಧಿಕಾರಿಗಳು ತುಘಲಕ್ ದರ್ಬಾರ್ ನಡೆಸಿದರೆಂದು ತಮ್ಮ 13.12.87ರ ಪತ್ರಿಕೆಯಲ್ಲಿ ಬಂದ ವರದಿಯಲ್ಲಿನ ವಿಚಾರಗಳು ಸತ್ಯಕ್ಕೆ ದೂರ ಎನ್ನಬೇಕಾಗಿದೆ.

**ಸ. ನಂ** 14ರ ಸರ್ಕಾರಿ ಗೋಮಾಳದ ಜಾಗದ ಸಮಸ್ಯೆಯು ಪ್ರಾರಂಭವಾಗಿದ್ದು ನವೆಂಬರ್ 1987ರಿಂದ. ಬನ್ನೂರು ಗ್ರಾಮದಲ್ಲಿ ತಲತಲಾಂತರಗಳಿಂದ ಹರಿಜನರು ಹಾಗೂ ಸವರ್ಣೀಯರು ಅನ್ಯೋನ್ಯವಾಗಿ ಪರಸ್ಪರರು ಅವಲಂಬಿಸಿಕೊಂಡು ಜೀವನ ನಡೆಸುತ್ತಿದ್ದಾರೆ. ಸ. ನಂ. 14ರಲ್ಲಿ ಈಗ ಘರ್ಷಣೆಗೆ ಕಾರಣವಾಗಿರುವ ಜಾಗದಲ್ಲಿ ಬನ್ನೂರು ಕುಂಬ್ರುಮನೆಯ ಹರಿಜನರ ಕಾಲೋನಿಯು ನೂರಾರು ವರ್ಷಗಳಿಂದ ಇದ್ದು, ಅಲ್ಲಿ ಈಗಲೂ ಕೂಡ ಅವರ ಸ್ಮಶಾನ ಹಾಗೂ ಅವರ ಕುಲದೇವತೆ 'ಕೋಲುದೇವರ ಬನ'ವನ್ನು ಹಾಗೂ ಅವರ ಪೂರ್ವಿಕರು, ನೆಲೆಸಿದ್ದ ಮನೆ ನೆಲಗಟ್ಟು, ನೆಟ್ಟು ಬೆಳೆಸಿದ ಹುಣಸೆ, ಚಕ್ಕೋತ, ಹಲಸಿನ ಮರಗಳನ್ನು ನೋಡಬಹುದು.

ಮೇಲಿನ ಎಲ್ಲಾ ವಿಷಯಗಳನ್ನೂ ಈ ಜಾಗದ ಸ್ಥಳ ಪರಿಶೀಲನೆ ಮಾಡಿದ ತಾಲ್ಲೂಕಿನ ಎಲ್ಲಾ ಅಧಿಕಾರಿಗಳೂ ತಮ್ಮ ವರದಿಯಲ್ಲಿ ಗಮನಿಸಿದ್ದಾರೆ.

ಸ. ನಂ. 14ರ ಸರ್ಕಾರಿ ಗೋಮಾಳದಲ್ಲಿ ಕೊಪ್ಪ ತಾಲ್ಲೂಕು, ಕಂಚಿನಕೆರೆಯ ಕೆ. ಎಚ್. ಸುಧಾಕರ ಎಂಬವರಿಗೆ ಮಿಲ್ಟ್ರಿ ದರಖಾಸ್ತು 10 ಎಕ್ರೆ ಮಂಜೂರಾಗಿದ್ದು, ಅದನ್ನು ಅವರ ಅಣ್ಣ ಕೆ. ಎಚ್. ನಾಗೇಶ್ ಮಾಡುತ್ತಿದ್ದಾರೆ ವಾರದಲ್ಲಿ 3 ದಿವಸ ಇಲ್ಲಿಯೇ ಇರುವ ಇವರೇ ಈ ಎಲ್ಲಾ ಸಮಸ್ಯೆಗಳ ಹಿನ್ನೆಲೆಗಾರ.

ತಾ|| ಪ್ರಾ|| ಭೂ ಬ್ಯಾಂಕ್ ನೌಕರರಾದ ಇವರು ಈ ತಕರಾರು ಜಾಗದ ಪಕ್ಕದಲ್ಲಿ ಮಂಜೂರಾದ 10 ಎಕ್ರೆ ಕಾಫಿ ಸಾಗುವಳಿ ಮಾಡಿದ್ದು, ಅದಕ್ಕೆ ಸೇರಿಸಿಕೊಂಡು ಸುಮಾರು 25 ಎಕ್ರೆ ಅಕ್ರಮ ಸಾಗುವಳಿ ಮಾಡುತ್ತಿದ್ದು, ಅದರಲ್ಲಿ ತಮ್ಮ ಚಮತ್ಕಾರದಿಂದ 15 ಎಕ್ರೆ ಪ್ರದೇಶವನ್ನು ಒಂದೇ ಸಾರಿಗೆ ಕಂದಾಯ ಇಲಾಖೆ ರಶೀತಿ ನಂ. 33276/19.5.86ರಂತೆ ನ.ರಾ.ಪುರದಲ್ಲಿ 1325-75 ರೂ.ಗಳನ್ನು ಪಾವತಿಸಿ, ತಮ್ಮ ಅಣ್ಣನವರಾದ ಕೆ.ಹೆಚ್. ಕೃಷ್ಣಪ್ಪ ನಾಯ್ಕ ಬಿ. ಹಾಲಪ್ಪ ನಾಯ್ಕ ಇವರ ಹೆಸರಿಗೆ ಟಿ. ಟಿ. ರಿಕಾರ್ಡು ಮಾಡಿಸಿ, ನಂತರ ಅವರೊಂದಿಗೆ ಮನಸ್ತಾಪದಿಂದ ರಿಕಾರ್ಡನ್ನು ಹಾಲಪ್ಪನಾಯ್ಕ ಬಿ. ಜುಂಜೇನಾಯ್ಕ ಎಂದು ತಿದ್ದಿಸಿ, ಅಧಿಕಾರಿಗಳಿಗೇ ಬ್ಲಾಕ್ ಮೈಲ್ ಮಾಡಿದವರು.

ಇನ್ನು ಉಳಿದಿರುವ ಪಕ್ಕದ ಮೇಲೆ ಕಾಣಿಸಿರುವ ತಕರಾರು ಜಾಗವನ್ನು ಸಹ ಕಬಳಿಸಲು, ತಮ್ಮ ಬಂಧುವಾದ, ಅನೇಕ ಕಡೆ ಪೋಲೀಸರಿಗೆ ಬೇಕಾಗಿರುವ ಬಿ.ಜಿ. ನಾರಾಯಣ ಗೌಡ, ಬಿ. ಎ. ರವೀಶ್ ಮತ್ತು ಅವರ ಸಹಚರರನ್ನು ತನ್ನ ಹಣದ ಅಮಲಿನಲ್ಲಿ ಎತ್ತಿ ಕಟ್ಟಿ, ಸ.ನಂ. 40ರಲ್ಲಿ ಜಮೀನು ಹೊಂದಿರುವ ಚಂದು ಪೂಜಾರಿ ಹಾಗೂ ಕೂಡಿಗೆ ಜನತಾ ಕಾಲೋನಿಯಲ್ಲಿ ಮನೆಗಳನ್ನು ಹೊಂದಿರುವ ಹರಿಜನರನ್ನು ಎರಡು ಕಿ.ಮೀ. ಅಂತರದಲ್ಲಿರುವ ಕುಂಬ್ರುಮನೆ ಹರಿಜನ ಕಾಲೋನಿಯಲ್ಲಿಗೆ ಕರೆತಂದು ಗಲಾಟೆ ಎಬ್ಬಿಸಿ, ಊರಿನ ಶಾಂತ ವಾತಾವರಣವನ್ನು ಕಲಕಿದ್ದಾರೆ.

ಸ್ಥಳೀಯರಾದ ಕುಂಬ್ರುಮನೆಯ 9 ಜನ ಹರಿಜನರಿಗೆ ಸ. ನಂ. 14ರಲ್ಲಿಯೇ ಬೇರೆ ಕಡೆ ಜಾಗ ಮಂಜೂರು ಆಗಿದ್ದು, ಅದರಲ್ಲಿ ಸರ್ಕಾರದವರು ಮರಗಳನ್ನು ತೆಗೆದಿಲ್ಲವಾದ್ದರಿಂದ ಕೃಷಿ ಮಾಡಲು ಸಾಧ್ಯವಾಗಿಲ್ಲ ಅಲ್ಲಿ ಇನ್ನು ಉಳಿದ 6 ಮಂದಿ ತಮ್ಮ ಪೂರ್ವಿಕರು ವಾಸವಾಗಿದ್ದ, ತಮ್ಮ ಕುಲದೇವತೆ 'ಕೋಲುದೇವರ ಬನ' ಹಾಗೂ ಸ್ಮಶಾನ ಇರುವ, ಈಗ ಘರ್ಷಣೆಗೆ ಕಾರಣವಾಗಿರುವ ಪ್ರದೇಶದಲ್ಲಿ 3-4 ವರ್ಷಗಳಿಂದ ದರಖಾಸ್ತು ಅರ್ಜಿಯನ್ನು ಸಲ್ಲಿಸಿದ್ದು, ಮುಳ್ಳಿ ಬೇಲಿಯನ್ನು ಸಹ ಮಾಡಿದ್ದರು.

ಆದರೆ ನಾಗೇಶರವರು ಅಕ್ಟೋಬರ್ 22 ರಂದು ಇದೇ ನಾರಾಯಣ ಗೌಡರ ಹೆಸರಿನಲ್ಲಿ ಬಾಳೆಹೊನ್ನೂರು ಎಲೆಮಡಲು ಟ್ರೇಡರ್ಸ್‌ನಲ್ಲಿ ಬೇಲಿ ತಂತಿಯನ್ನು ಖರೀದಿಸಿ, ನಾವು ಹಾಕಿದ್ದ ಮುಳ್ಳು ಬೇಲಿಯನ್ನು ಕೀಳಿಸಿ, ತಮ್ಮ ತೋಟದ ಪಕ್ಕದಲ್ಲಿ ತಲಾ 2 ಗುಂಟೆ ಜಾಗಕ್ಕೆ ಸಾಗುವಳಿ ಚೀಟಿ ಪಡೆದ ಫೌಂಡೇಶನ್ ಮಾಡಿದ್ದ ಬಿ.ಕೆ. ಚಂದ್ರಪ್ಪ ಮತ್ತು ಬಿ.ಕೆ. ಶೀನಪ್ಪ ಇವರ ಜಾಗಕ್ಕೂ, ಹಾಗೂ ಕುಂಬ್ರುಮನೆಯ 6 ಮಂದಿ ಹರಿಜನರು ದರಖಾಸ್ತು ಕೊಟ್ಟ ಜಾಗಕ್ಕೂ ಬೇಲಿ ಮಾಡಲು ಪ್ರಾರಂಭಿಸಿದರು.

(4ನೇ ಪುಟಕ್ಕೆ)

# 'ದಲಿತರ ಮೇಲಿನ ದೌರ್ಜನ್ಯವಲ್ಲ'

(3ನೇ ಪುಟದಿಂದ)

ಈ ಬಗ್ಗೆ ಅಂದೇ ನಾವು ಸ್ಥಳೀಯ ಠಾಣಾಧಿಕಾರಿಗಳಿಗೂ, ಅರಣ್ಯಾಧಿಕಾರಿಗಳಿಗೂ, ಬಸ್ರೂರು ಮಂಡಲ ಪಂಚಾಯಿತಿಯವರಿಗೂ, ದೂರು ಅರ್ಜಿಯನ್ನು ಸಲ್ಲಿಸಿ, ನಂತರ ತಹಸೀಲ್ದಾರರಿಗೂ, ಉಪ ವಿಭಾಗ ಅಧಿಕಾರಿಗಳಿಗೂ ಸಹ ಅರ್ಜಿ ಸಲ್ಲಿಸಿದ್ದು, ಅಕ್ಟೋಬರ್ 30 ರಂದು ಜಿಲ್ಲಾಧಿಕಾರಿಗಳಿಗೂ, ಜಿಲ್ಲಾ ರಕ್ಷಣಾಧಿಕಾರಿಗಳಿಗೂ ಅರ್ಜಿ ಸಲ್ಲಿಸಿ ನ್ಯಾಯ ದೊರಕಿಸಲು ಕೇಳಿದ್ದೆವು. ಅಧಿಕಾರಿಗಳು ಸ್ಥಳ ಪರಿಶೀಲಿಸಿ, ಮೇಲಿನ ಎಲ್ಲಾ ಸಾಕ್ಷ್ಯಾಧಾರಗಳನ್ನು ಗಮನಿಸಿ, ಡಿ. 1ರಂದು ತಹಸೀಲ್ದಾರರ ನೇತೃತ್ವದಲ್ಲಿ ಅಕ್ರಮ ಬೇಲಿಯನ್ನು ಕೀಳಿಸಿ, ಬೇಲಿ ತಂತಿಯನ್ನು ವಾರಸುದಾರರಿಗೆ ಕೊಟ್ಟು, ಬೇಲಿ ಕಂಬಗಳನ್ನು ಮಾತ್ರ ಅರಣ್ಯ ಇಲಾಖೆಯ ಲಾರಿಯಲ್ಲಿ ತೆಗೆದುಕೊಂಡು ಹೋಗಿದ್ದಾರೆ.

ದಕ್ಷ ಅಧಿಕಾರಿಗಳ ಮೇಲೆ ಹಾಗೂ ಸ್ಥಳೀಯ ಜನಾನುರಾಗಿಗಳೂ, ಊರಿನ ಶ್ರೇಯೋಭಿವೃದ್ಧಿಗೋಸ್ಕರ ಶ್ರಮಿಸಿದವರೂ, ಸುಮಾರು 18 ವರ್ಷಗಳ ಕಾಲ ಪಂಚಾಯಿತಿ ಅಧ್ಯಕ್ಷರಾಗಿದ್ದವರೂ ಆದ ಮಾಜಿ ಪಟೇಲ್ ಬಿ. ಟಿ. ಮಂಜಪ್ಪ ಗೌಡರ ಮೇಲೆ ಹಾಗೂ ಸ್ಥಳೀಯ ಪ್ರಮುಖರಾದ ಬಿ. ಕೆ. ಮಂಜಪ್ಪ ಗೌಡರ ಮೇಲೆ ರಾಜಕೀಯ ಸೇಡನ್ನು ತೀರಿಸಿಕೊಳ್ಳಲು ಕೆಲವೇ ಮಂದಿ ಇಲ್ಲ ಸಲ್ಲದ ಆರೋಪಗಳನ್ನು ಮಾಡಿರುವುದು ಸತ್ಯವನ್ನು ಮರೆಮಾಚುವ ಯುಕ್ತಿಯಾಗಿದೆ.

—ನೊಂದ ಗ್ರಾಮಸ್ಥರು ಹಾಗೂ ಸ್ಥಳೀಯ ಹರಿಜನರು

(36 ಜನರ ಸಹಿ–ಹೆಬ್ಬೆಟ್ಟುಗಳಿವೆ)

## ತಾ|| ಯು|| ಒಕ್ಕೂಟದ ನೂತನ ಪದಾಧಿಕಾರಿಗಳು

ಎನ್. ಎಲ್. ನಾಗಭೂಷಣ್ (ಅಧ್ಯಕ್ಷರು); ಕು|| ಶಶಿಪ್ರಭ, ಕೆ. ಎಸ್. ಮಂಜುನಾಥ್ (ಉಪಾಧ್ಯಕ್ಷರು); ಎಸ್. ಎನ್. ರಾಮಸ್ವಾಮಿ (ಕಾರ್ಯದರ್ಶಿ); ಎಚ್. ಎಸ್. ರಂಗಣ್ಣ (ಸಹ ಕಾರ್ಯದರ್ಶಿ); ಎಚ್. ದಯಾನಂದ (ಸಂಚಾಲಕ) ಹಾಗೂ 14 ಜನ ಕಾರ್ಯಕಾರಿ ಮಂಡಳಿ ಸದಸ್ಯರು

## ಜೇಸೀ ಅಧ್ಯಕ್ಷರು, ಕಾರ್ಯದರ್ಶಿಗಳು

ಬಿಳಾಲ್‌ಕೊಪ್ಪ ಮೇರುತಿ ಜೇಸೀಸ್‌ಗೆ 1987–88ನೇ ಸಾಲಿಗೆ ನೂತನ ಅಧ್ಯಕ್ಷರಾಗಿ ಜಗದೀಶ್ ಗಚ್ಚಿನಮಠ ಹಾಗೂ ಕಾರ್ಯದರ್ಶಿಯಾಗಿ ಬಿ. ವಿ. ಶ್ರೀಧರರಾವ್ ಆಯ್ಕೆಯಾಗಿದ್ದಾರೆ. ಶೃಂಗೇರಿ ಜೇಸೀಸ್ ಅಧ್ಯಕ್ಷರಾಗಿ ಎಚ್. ಕೆ. ವೆಂಕಟೇಶ್ ಭಟ್ ಹಾಗೂ ಕಾರ್ಯದರ್ಶಿಯಾಗಿ ಕೆ. ಎಸ್. ರಮೇಶ್ ರಾವ್ ಆಯ್ಕೆಯಾಗಿದ್ದಾರೆ.

## ಕೊಪ್ಪ ತಾಲ್ಲೂಕು ಮಟ್ಟದ ಯುವ ಮೇಳ

ರಂಗ ಮಂದಿರ, ಬಸರಿಕಟ್ಟೆ.

**ಉದ್ಘಾಟನಾ ಸಮಾರಂಭ, ತಾ|| 2-1-1988**

ಅಧ್ಯಕ್ಷತೆ : ಶ್ರೀ ಆರ್. ಶ್ರೀನಿವಾಸ್, ತಹಸೀಲ್ದಾರ್, ಕೊಪ್ಪ.
ಉದ್ಘಾಟನೆ : ಶ್ರೀಮತಿ ಟಿ. ಒ. ಥಾಮಸ್, ಎಂ.ಎಸ್. ಎಸ್ಟೇಟ್, ಬಸರಿಕಟ್ಟೆ
ಸ್ಪರ್ಧಿಗಳ ಪರವಾಗಿ ಶ್ರೀ ಎಚ್. ದಯಾನಂದ, ಸಂಚಾಲಕರು,
ಪ್ರಮಾಣವಚನ ಸ್ವೀಕಾರ : ಕು|| ಶಶಿಪ್ರಭಾ, ಉಪಾಧ್ಯಕ್ಷರು.
ತಾಲ್ಲೂಕು ಯುವಜನ ಒಕ್ಕೂಟ.
ಮುಖ್ಯ ಅತಿಥಿಗಳು : ಶ್ರೀ ರಾಮಮೂರ್ತಿ, ಕಾರ್ಯದರ್ಶಿ,
ತಾಲ್ಲೂಕು ಪಂಚಾಯ್ತಿ ಸಮಿತಿ, ಕೊಪ್ಪ.

**ಮುಕ್ತಾಯ ಸಮಾರಂಭ, ತಾ|| 3.1 1988**

ಅಧ್ಯಕ್ಷತೆ : ಶ್ರೀ ಬಿ. ಎನ್. ಭಾಸ್ಕರ್,
ಮಂಡಲ ಪ್ರಧಾನರು, ಅತ್ತಿಕೊಡಿಗೆ ಮಂಡಲ ಪಂಚಾಯ್ತಿ
ಬಹುಮಾನ ವಿತರಣೆ : ಶ್ರೀ ಎಚ್. ಜಿ. ಗೋವಿಂದ ಗೌಡ,
ಶಾಸಕರು, ಶೃಂಗೇರಿ ಕ್ಷೇತ್ರ.
ಮುಖ್ಯ ಅತಿಥಿಗಳು : ಶ್ರೀ ಎಚ್. ಎಂ. ಮಾಸ್ತಿ,
ಸದಸ್ಯರು, ಚಿಕ್ಕಮಗಳೂರು ಜಿಲ್ಲಾ ಪರಿಷತ್.

ವಿ. ಸೂ. :— ಯುವಕರ ನಾಟಕ ಮತ್ತು ಯಕ್ಷಗಾನ ಸ್ಪರ್ಧೆಗಳು ದಿನಾಂಕ 1-1-1988ರಂದು ಸಂಜೆ 6 ಗಂಟೆಯಿಂದ ಪ್ರಾರಂಭವಾಗುತ್ತವೆ.

ಸರ್ವರಿಗೂ ಆದರದ ಸುಸ್ವಾಗತ

ನಾಗರಿಕ ಸಮಿತಿ, ತಾ|| ಯುವಜನ ಮೇಳ,
ಬಸರಿಕಟ್ಟೆ









ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಶಿವಾನಂದ ನಾಗರಾಜ್, ವಿಳಾಸ : ಶಿವಶಕ್ತಿ ಆಜಾದ್ ಕಟ್ಟೆ, ಕೊಪ್ಪ